# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1375
ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ ಅರಳಿ
(ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 16.03.2021
ಉತ್ತರಿಸುವ ಸಚಿವರು : ಮಾನ್ಯ ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಯಲ್ಲಿ ಮಂಜೂರಾದ ವಾರ್ತಾ ಅಧಿಕಾರಿಗಳ ಸಂಖ್ಯೆ ಎಷ್ಟು; ಭರ್ತಿ ಮಾಡಲಾದ ಹುದ್ದೆಗಳೆಷ್ಟು; ಖಾಲಿ ಇರುವ ಹುದ್ದೆಗಳೆಷ್ಟು; | ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಗೆ **7** ವಾರ್ತಾ ಅಧಿಕಾರಿಗಳ ಹುದ್ದೆಗಳು ಮಂಜೂರಾಗಿರುತ್ತವೆ.<br><br>ಭರ್ತಿ ಮಾಡಲಾದ ಹುದ್ದೆಗಳ ಸಂಖ್ಯೆ : **3**<br><br>ಖಾಲಿ ಇರುವ ಹುದ್ದೆಗಳ ಸಂಖ್ಯೆ : **4** |
| ಆ) | ಖಾಲಿ ಇದ್ದಲ್ಲಿ, ಆ ಹುದ್ದೆಗಳನ್ನು ಭರ್ತಿ ಮಾಡುವುದು ಯಾವಾಗ : | ರಾಜ್ಯದಲ್ಲಿ ಕರೋನಾ ಸಾಂಕ್ರಾಮಿಕ ರೋಗ ಇರುವುದರಿಂದ ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಗೆ ಬರುವ ಹುದ್ದೆಗಳನ್ನೂ ಸಹಾ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಆರ್ಥಿಕ ಇಲಾಖೆ ನಿರ್ಬಂಧಿಸಲಾಗಿದೆ. ರಾಜ್ಯದಲ್ಲಿ ಸಂಪನ್ಮೂಲ ಕ್ರೂಢೀಕರಿಸಿದ ನಂತರ ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಯಲ್ಲಿ ಖಾಲಿ ಇರುವ ಹುದ್ದೆಗಳನ್ನೂ ಸಹಾ ಹಂತ ಹಂತವಾಗಿ ಭರ್ತಿ ಮಾಡಲಾಗುವುದು. |
| ಇ) | ವಾರ್ತಾ ಸಹಾಯಕರಿಗೆ ಹೆಚ್ಚುವರಿ ಮುಂಬಡ್ತಿ ಮಾಡುವ ಯೋಚನೆ ಸರ್ಕಾರದ ಮುಂದಿದೆಯೇ; ಇದ್ದರೆ, ಮಾಡುವುದು ಯಾವಾಗ ; ಇಲ್ಲದಿದ್ದರೆ, ಕಾರಣಗಳೇನು; | ವಾರ್ತಾ ಸಹಾಯಕರಿಗೆ ಹೆಚ್ಚುವರಿ ಮುಂಬಡ್ತಿ ನೀಡುವ ಯಾವುದೇ ಪ್ರಸ್ತಾವನೆ ಇಲಾಖೆ ಮುಂದೆ ಇರುವುದಿಲ್ಲ.<br><br>ಕಾರಣ, ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳನ್ವಯ ಹಾಗೂ ಹಾಲಿ ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಪ್ರತಿಯೊಂದು ವೃಂದದಲ್ಲೂ ಹುದ್ದೆಗಳನ್ನು ನೇರ ನೇಮಕಾತಿ ಮತ್ತು ಮುಂಬಡ್ತಿಗೆ ಮೀಸಲಿಡಲಾಗುವುದು. ಈ ನಿಯಮಗಳನ್ನು ಉಲ್ಲಂಘಿಸಿ ವಾರ್ತಾ ಸಹಾಯಕರಿಗೆ ಹೆಚ್ಚುವರಿಯಾಗಿ ಮುಂಬಡ್ತಿ ನೀಡಲು ಸಾಧ್ಯವಿರುವುದಿಲ್ಲ. |
| ಈ) | ವಾರ್ತಾ ಸಹಾಯಕರ ಹುದ್ದೆಗಳ ನೇಮಕಾತಿ ಮಾಡುವ ಯೋಚನೆ ಸರ್ಕಾರದ ಮುಂದಿದೆಯೇ ; ಇದ್ದಲ್ಲಿ, ಯಾವಾಗ ಮಾಡಲಾಗುವುದು ; ಇಲ್ಲದಿದ್ದಲ್ಲಿ, ಕಾರಣ ತಿಳಿಸುವುದು? | ರಾಜ್ಯದಲ್ಲಿ ಕರೋನಾ ಸಾಂಕ್ರಾಮಿಕ ರೋಗ ಇರುವುದರಿಂದ ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಗೆ ಬರುವ ಹುದ್ದೆಗಳನ್ನೂ ಸಹಾ ಒಳಗೊಂಡಂತೆ ಇನ್ನಿತರೆ ವಾರ್ತಾ ಸಹಾಯಕರ ಹುದ್ದೆಗಳನ್ನು ಸಹ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಆರ್ಥಿಕ ಇಲಾಖೆ ನಿರ್ಬಂಧಿಸಲಾಗಿದೆ. ರಾಜ್ಯದಲ್ಲಿ ಸಂಪನ್ಮೂಲ ಕ್ರೂಢೀಕರಿಸಿದ ನಂತರ ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಯಲ್ಲಿ ಖಾಲಿ ಇರುವ ವಾರ್ತಾ ಸಹಾಯಕರ ಹುದ್ದೆಗಳ ನೇಮಕಾತಿಯನ್ನು ಹಂತ ಹಂತವಾಗಿ ಭರ್ತಿ ಮಾಡಲಾಗುವುದು. |

KCI-PIP/70/2021-INFO-KC-SEC

(ಸಿ.ಸಿ.ಪಾಟೀಲ್)
ಮಾನ್ಯ ಸಣ್ಣ ಕೈಗಾರಿಕೆ ಹಾಗೂ
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು